KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಡಿಸೆಂಬರ್ ೪, ೨೦೦೮ (ಮಾರ್ಗಶಿರ ೧೩, ಶಕ ವರ್ಷ ೧೯೩೦) | ಸಂಚಿಕೆ ೪೮ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 1 ಮುಸೇವಿ 2007, ಬೆಂಗಳೂರು, ದಿನಾಂಕ:31ನೇ ಅಕ್ಟೋಬರ್, 2008**

ಧಾರ್ಮಿಕ ದತ್ತಿ ಇಲಾಖೆಯ ಸಮೂಹ 'ಎ' ಮತ್ತು ಸಮೂಹ 'ಬಿ' ವೃಂದದ ಅಧಿಕಾರಿಗಳ, ಆಗಮ ಪಂಡಿತರ ಮತ್ತು ಸಂಸ್ಕೃತ ಕಾಲೇಜುಗಳ ಪ್ರಾಧ್ಯಾಪಕರ, ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಕಂಇ 1 ಮುಸೇವಿ 2007 ದಿನಾಂಕ:02–08–2007ರ ಅಧಿಸೂಚನೆಯಲ್ಲಿ ದಿನಾಂಕ:01–01–2006ರಲ್ಲಿದ್ದಂತೆ ಪ್ರಕಟಿಸಿ ಆದೇಶ ಹೊರಡಿಸಲಾಗಿತ್ತು. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿರುವ ಸ್ಥಾನವನ್ನು ಒಪ್ಪಿಕೊಳ್ಳುವುದರಿಂದ ಬಾಧಿತರಾದ ಅಥವಾ ಒಪ್ಪಿಕೊಳ್ಳದ ಅಧಿಕಾರಿಗಳು ಈ ಸ್ಥಾನದಿಂದ ಬಾಧಿತರಾಗಿರುವುದಕ್ಕೆ ಅಥವಾ ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ಮತ್ತು ಆಧಾರಗಳನ್ನು ಒಳಗೊಂಡ ಆಕ್ಷೇಪಣೆಗಳನ್ನು ದ್ವಿ–ಪ್ರತಿಯಲ್ಲಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳ ಒಳಗಾಗಿ ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಅದರಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಕೆಲವರು ಆಕ್ಷೇಪಣೆಗಳನ್ನು ಸಲ್ಲಿಸಿದ್ದು, ಆಕ್ಷೇಪಣೆಗಳನ್ನು ಸಲ್ಲಿಸಿದವರ ಕೋರಿಕೆಯನ್ನು ಪರಿಶೀಲಿಸಿದ್ದು, ಅದರಂತೆ ಅಂತಿಮಗೊಳಿಸಿ ಇದಕ್ಕೆ ಲಗತ್ತಿಸಿರುವ ಅನುಬಂಧದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**ಅನುಬಂಧ – I**

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಸಮೂಹ – ಎ ವೃಂದದ (ಕಿರಿಯ ಶ್ರೇಣಿ) ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ**

**ಅಧಿಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಎ. ವಿಜಯ | 16–09–1951 | 18–04–1973 | 09–11–1995 | 03–04–1991 |

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 2 | ಕಮಲಮ್ಮ (ಪ.ಜಾ) | 11–04–1949 | 15–04–1971 | 01–04–1991 | 03–04–1991 |
| 3 | ಎನ್. ರಾಮಮೂರ್ತಿ | 30–03–1952 | 10–01–1975 | 09–11–1995 | 09–11–1995 |
| 4 | ನಿಂಗಯ್ಯ | 25–02–1951 | 10–01–1975 | 06–07–1996 | 09–11–1995 |
| 5 | ವಿ.ಆರ್. ರಂಗಶಾಮಯ್ಯ | 23–02–1949 | 10–01–1975 | 05–05–2005 | 06–07–1996 |
| 6 | ಎಲ್.ಕೆ. ರೇವಣಕರ್ | 01–06–1949 | 19–12–1969 | 06–07–1996 | 06–07–1996 |
| 7 | ಟಿ.ಡಿ. ನರಸಿಂಹಯ್ಯ | 28–05–1951 | 25–02–1977 | 11–02–2003 | 11–02–2003 |
| 8 | ಸಂಜೀವ ಮಡಿವಾಳ | 22–04–1952 | 02–04–1977 | 11–02–2003 | 11–02–2003 |
| 9 | ಎ.ಹೆಚ್. ಮದರ್‌ಕಲ್ | 01–06–1952 | 07–05–1977 | 11–02–2003 | 11–02–2003 |
| 10 | ಎನ್.ಟಿ. ಮಾದರ್ (ಪ.ಜಾ) | 26–01–1952 | 01–03–1977 | 11–02–2003 | 11–02–2003 |
| 11 | ಆರ್. ಮಾಧವ್ | 27–07–1951 | 12–05–1977 | 11–02–2003 | 11–02–2003 |
| 12 | ಹೆಚ್.ಎಂ. ಕಾಳಿ (ಪ.ಜಾ) | 15–05–1953 | 23–11–1981 | 24–01–2005 | 24–01–2005 |
| 13 | ಎಸ್.ಟಿ. ಸುಧಾ | 11–08–1953 | 12–04–1973 | 28–01–2005 | 28–01–2005 |
| 14 | ಹುಚ್ಚಪ್ಪ | 08–10–1949 | 14–09–1968 | 03–03–2005 | 03–03–2005 |

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**ಅನುಬಂಧ – II**

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಸಮೂಹ – ಬಿ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

**ಅಧಿಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಟಿ.ಎನ್. ರಮೇಶ್ | 04–05–1955 | 23–11–1981 | 09–04–1997 | 09–04–1997 |
| 2 | ಆನಂದ ಗ್ರಾಮೋಪಾಧ್ಯಾಯ | 22–05–1957 | 23–11–1981 | 11–02–2003 | 11–02–2003 |
| 3 | ಹೆಚ್.ಎಂ.ಶಿವಲಿಂಗೇಗೌಡ | 12–06–1954 | 23–11–1981 | 11–02–2003 | 11–02–2003 |
| 4 | ಸಿ.ವಿ. ದಾವಣಗೇರಿ | 16–08–1954 | 23–11–1981 | 11–02–2003 | 11–02–2003 |
| 5 | ಎಲ್.ಎಸ್. ಮಾರುತಿ | 04–01–1955 | 23–11–1981 | 11–02–2003 | 11–02–2003 |
| 6 | ಎಂ. ನಾಗರಾಜ | 06–05–1956 | 23–11–1981 | 11–02–2003 | 11–02–2003 |
| 7 | ಎಸ್.ಎನ್. ಕೊಳ್ಳಿಯವರ್ | 01–04–1952 | 24–02–1997 | 11–02–2003 | 11–02–2003 |
| 8 | ಎಂ.ಎ. ಜಗದೀಶ್ | 20–02–1955 | 09–02–1984 | 11–02–2003 | 11–02–2003 |
| 9 | ಡಿ.ಕೆ. ನಿಂಬಾಳ್ | 01–10–1955 | 09–02–1984 | 11–02–2003 | 11–02–2003 |
| 10 | ಆರ್.ಕೆ. ಹಿಟ್ಟಿನಮಠ | 07–01–1959 | 09–02–1984 | 11–02–2003 | 11–02–2003 |
| 11 | ಎಸ್.ಆರ್. ಚಾವ್ಹಣ್ (ಪ.ಜಾ) | 01–06–1952 | 09–02–1984 | 11–02–2003 | 11–02–2003 |
| 12 | ಮೆಹಬೂಬ್ ಷರೀಫ್ | 02–03–1948 | 17–04–1973 | 11–02–2003 | 11–02–2003 |
| 13 | ಟಿ.ಆರ್. ಉಮಾ | 20–05–1957 | 31–08–1984 | 11–02–2003 | 11–02–2003 |
| 14 | ಮ್ಯಾಗ್ದಲೀನ ನಳಿನಾ | 04–04–1958 | 27–08–1984 | 11–02–2003 | 11–02–2003 |
| 15 | ಬಿ.ವೈ. ರಭಕವಿ (ಪ.ಜಾ) | 15–01–1951 | 10–10–1985 | 11–02–2003 | 11–02–2003 |
| 16 | ಇ.ಜಿ. ನಾಯಕ್ | 01–05–1955 | 09–02–1984 | 14–02–2005 | 14–02–2005 |
| 17 | ಜಯಪ್ರಕಾಶ್ | 14–01–1959 | 18–10–1985 | 14–02–2005 | 14–02–2005 |
| 18 | ಸಿ.ಯು. ಪೂವಪ್ಪ | 24–05–1956 | 05–02–1986 | 14–02–2005 | 14–02–2005 |

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 19 | ಗಂಗನರಸಿಂಹಯ್ಯ | 08–03–1948 | 24–03–1971 | 14–02–2005 | 14–02–2005 |
| 20 | ಕೆ. ಮೋಹಿನಿ ಶೆಟ್ಟಿ | 28–05–1949 | 15–11–1971 | 14–02–2005 | 14–02–2005 |
| 21 | ಲಕ್ಷ್ಮಿ | 01–07–1964 | 10–09–1984 | 14–02–2005 | 14–02–2005 |
| 22 | ಎಸ್.ಎಂ. ಸಂಬಣ್ಣಿ | 05–12–1951 | 30–08–1974 | 14–02–2005 | 14–02–2005 |
| 23 | ಎಂ. ಸುಬ್ಬಾಮುಲ್ಯ | 15–02–1952 | 10–01–1975 | 14–02–2005 | 14–02–2005 |
| 24 | ಕೆ. ರಾಮು | 21–12–1952 | 25–05–1988 | 14–02–2005 | 14–02–2005 |
| 25 | ಸೈದಪ್ಪ ಕೊಠಾರಗಸ್ತಿ | 18–08–1963 | 25–02–1988 | 14–02–2005 | 14–02–2005 |
| 26 | ಕೆ.ಎನ್ ಪಂಕಜಮ್ಮ | 10–07–1951 | 03–03–1988 | 14–02–2005 | 14–02–2005 |
| 27 | ನಿಂಗಯ್ಯ (ಪ.ಜಾ) | 01–06–1964 | 30–12–1991 | 14–02–2005 | 14–02–2005 |
| 28 | ಹೆಚ್.ಎಸ್. ಹನುಮಂತಪ್ಪ (ಪ.ಜಾ) | 01–07–1951 | 15–01–1975 | 01–12–2005 | 01–12–2005 |
| 29 | ಶಿವಕುಮಾರಯ್ಯ | 21–07–1961 | 01–03–1988 | 01–12–2005 | 01–12–2005 |
| 30 | ಅಶೋಕ್ ನಾರಾಯಣ್ ನಾಯಕ್ | 14–06–1948 | 22–05–1988 | 01–12–2005 | 01–12–2005 |
| 31 | ಪ್ರತಿಭಾ | 20–12–1948 | 22–05–1988 | 20–12–2005 | 20–12–2005 |

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**ಅನುಬಂಧ – III**

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಹಿರಿಯ ಆಗಮ ಪಂಡಿತರ (ಕೇಂದ್ರ ಕಛೇರಿ) ಅಂತಿಮ ಜೇಷ್ಠತಾ ಪಟ್ಟಿ**

**ಅಧಿಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಗಣಪತಿಮಹಾಬಲೇಶ್ವರ ಶಾಸ್ತ್ರಿ (ಶೈವಾಗಮ) | 04–06–1956 | 27–07–1996 | 04–06–2003 | 04–06–2003 |

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**ಅನುಬಂಧ – IV**

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಕಿರಿಯ ಆಗಮ ಪಂಡಿತರ (ಕೇಂದ್ರ ಕಛೇರಿ) ಅಂತಿಮ ಜೇಷ್ಠತಾ ಪಟ್ಟಿ**

**ಅಧಿ ಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಎ.ಎನ್. ರಘುನಾಥ್ (ವೈಖಾನಸಾಗಮ) | 01–01–1961 | 23–06–1999 | – | 23–06–1999 |

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

ಅನುಬಂಧ – V

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಮೇಲುಕೋಟೆ ಸರ್ಕಾರಿ ಸಂಸ್ಕೃತ ಕಾಲೇಜಿನ ಪಂಡಿತರ/ ಪಬಂಧ ಉಪಾಧ್ಯಾಯರು / ಅಂತಿಮ ಜೇಷ್ಠತಾ ಪಟ್ಟಿ**

**ಅಧಿ ಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| I | ಹಿರಿಯ ಪಂಡಿತರು (ಗ್ರೂಪ್ – ಎ ದರ್ಜೆ) | | | | |
| 1 | ಎಸ್.ಎಸ್. ಶೆಲ್ವನಾರಾಯಣ (ವಿಶಿಷ್ಠಾದ್ವೈತ ಪಂಡಿತರು) | 06–07–1956 | 14–10–1984 | 13–05–2005 | 13–05–2005 |
| 2 | ಉಮಾಕಾಂತ್ ಭಟ್ (ತರ್ಕ ಪಂಡಿತರು) | 31–07–1958 | 26–10–1984 | 13–05–2005 | 13–05–2005 |
| II | ಕಿರಿಯ ಪಂಡಿತರು (ಗ್ರೂಪ್ – ಬಿ ದರ್ಜೆ) | | | | |
| 1 | ಡಾ:ಇ.ಜೆ. ಶ್ರೀವೆಂಕಟೇಶನ್ (ಸಾಹಿತ್ಯ ಪಂಡಿತರು) | 20–05–1960 | 20–05–1996 | – | 20–05–1996 |
| 2 | ದತ್ತಾತ್ರೇಯ ಗೋಪಾಲ ಕೃಷ್ಣಭಟ್ (ಕೃಷ್ಣಯರ್ಜುವೇದ ಪಂಡಿತರು) | 17–04–1960 | 09–03–1998 | – | 09–03–1998 |
| III | ಪಬಂಧ ಉಪಾಧ್ಯಾಯರು / ಆಂಗ್ಲ ಶಿಕ್ಷಕರು | | | | |
| 1 | ಕೈಂಕರ್ಯರಂಗರಾಜನ್ (ಪ್ರಬಂಧ ಉಪಾಧ್ಯಾಯರು) | 16–02–1956 | 04–07–1985 | – | 04–07–1985 |

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

ಅನುಬಂಧ – VI

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿನ ಆಗಮ ಶಾಖೆಯ ಪಾಧ್ಯಾಪಕರ ಅಂತಿಮ ಜೇಷ್ಠತಾ ಪಟ್ಟಿ**

**ಅಧಿಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಎಸ್.ಎ. ಕಮಲ (ಜೈನಾಗಮ) | 08–02–1957 | 11–03–1957 | – | 11–03–1957 |
| 2 | ಎಸ್. ಶೀನಿಧಿ (ವೈಖಾನಸಾಗಮ) | 05–12–1968 | 14–08–1997 | – | 14–08–1997 |
| 3 | ಚಕವರ್ತಿ ಶೀವತ್ಸ (ಆಗಮ ವೇದ) | 05–08–1964 | 02–06–1996 | 27–08–1998 | 27–08–1998 |
| 4 | ಸಿ.ಎಸ್. ಶಿವಕುಮಾರ್ (ಶೈವಾಗಮ) | 28–08–1969 | 16–11–1997 | 25–08–2005 | 25–08–2005 |
| 4 | ಎಸ್. ಲೋಕೇಶಾರಾಧ್ಯ ವೀರಶೈವಾಗಮ) | 16–07–1957 | 21–01–1998 | 25–08–2005 | 25–08–2005 |

ಅನುಬಂಧ – VII

**ದಿನಾಂಕ:01–01–2006ರಲ್ಲಿದಂತೆ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿನ ಆಗಮ ಶಾಖೆಯ ಸಹಾಯಕ ಪಾಧ್ಯಾಪಕರ ಅಂತಿಮ ಜೇಷ್ಠತಾ ಪಟ್ಟಿ**

**ಅಧಿ ಸೂಚನೆ ಸಂಖ್ಯೆ:ಕಂಇ 1 ಮುಸೇವಿ 2007 ದಿನಾಂಕ:31–10–2008**

| ಕ್ರ. ಸಂ | ಅಧಿಕಾರಿಯ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹುದ್ದೆಗೆ ಮುಂಬಡ್ತಿ ಪಡೆದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | ಎಸ್.ಎ.ಸುಧಾ (ಜೈನಾಗಮ) | 11–12–1955 | 31–08–1986 | – | 31–08–1986 |
| 2 | ಎಸ್. ರಾಜಗೋಪಾಲನ್ (ವೈಖಾನಸಾಗಮ) | 07–06–1967 | 06–01–1998 | – | 06–01–1998 |

**ಜಿ. ರಾಮಚಂದ್ರಯ್ಯ**
ಪಿ.ಆರ್.1277
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**UNIVERSITY OF AGRICULTURAL SCIENCES, BANGALORE**

**Office of the Registrar, GKVK, Bangalore-560 065**

**KARNATAKA, INDIA**

**NOTIFICATION**

**No.R/S-III/Registered Gradiate/2008-09, Bangalore, Dated:20th October, 2008**

**Sub:** Enhancement of fee for Registration as Registered Graduates of the UAS, Bangalore-Amendment to Statute-Reg.

**Ref:** 1) Decision of the 321st Meeting of the Board of Regents, UAS, Bangalore held on 28.03.2007.

2) Approval of the Vice-Chancellor, UAS, Bangalore Dated:30.09.2008.

| Existing under statute 61(A) 3 | Amended |
|---|---|
| Procedure and fee<br>Any person who wishes to register himself as a Registered Graduate of the University shall apply in the prescribed form to the Registrar and pay fee of Rs.5.00, which will entitle him/her to have his/her name entered in the register. | Procedure and fee<br>Any person who wishes to register himself as a Registered Graduate of the University shall apply in the prescribed form to the Registrar and pay fee of Rs.25/- towards application fee and Rs.250/- towards registration fee, which will entitle him/her to have him/her name entered in the register and retain in the register for life. |

This Amendments will come into effect from the date of publication of this amendment in the Karnataka Gazette.

By Order

PD-101

**B. RAJU**

REGISTRAR.

**ಕಾರ್ಮಿಕ ಅಧಿಕಾರಿ ಮತ್ತು ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ವಿಭಾಗ-1, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ:507/2008/1279, ದಿನಾಂಕ:12ನೇ ನವೆಂಬರ್, 2008**

**ಇವರ ನಡುವೆ:**

**ಅರ್ಜಿದಾರರು:**

1) ಶ್ರೀಮತಿ ಕಿರಣ್ಮಯಿ ಗಂಡ ಲೇಟ್ ಮೋಹನ್‌ರೆಡ್ಡಿ, ವಯಸ್ಸು 20 ವರ್ಷ, ಗೃಹಿಣಿ.

2) ಶ್ರೀಮತಿ ಈಶ್ವರಮ್ಮ ಗಂಡ ಓಬಳರೆಡ್ಡಿ, ವಯಸ್ಸು 49 ವರ್ಷ, ಗೃಹಿಣಿ.

3) ಕೆ.ಓಬಳರೆಡ್ಡಿ ತಂದೆ: ಚಿನ್ನಪ್ಪರೆಡ್ಡಿ, ವಯಸ್ಸು 52 ರೆಡ್ಡಿ, ಜುವಾರಿ ಸಿಮೆಂಟ್ ಫ್ಯಾಕ್ಟರಿಯಲ್ಲಿ ಸೂಪರ್ ವೈಜರ್ ಕೆಲಸ. ಎಲ್ಲರ ವಾಸ: ತಿಪ್ಪಾರೆಡ್ಡಿಪಲ್ಲಿ, ಪೆಂಡ್ಲಿಮರಿಮಂಡಲಂ, ಕಡಪ ತಾಲ್ಲೂಕು ಮತ್ತು ಜಿಲ್ಲೆ, ಆಂಧ್ರಪ್ರದೇಶ.

**ಪ್ರತಿವಾದಿಗಳು:**

1) ಭಾಸ್ಕರ್ ರೆಡ್ಡಿ ತಂದೆ ಕೆ. ಚಿನ್ನಪು ರೆಡ್ಡಿ, ವಯಸ್ಕರು, ಮಾಲೀಕರು ಲಾರಿ ನಂ.ಎಪಿ-04/ಎಕ್ಸ್-2778, ವಾಸ: ಮನೆ ನಂ.4/361 ಎಸ್.ಎ.ನಗರ, ಚಿಲಮಕೂರು, ಎರ್ರಗುಂಟ್ಲ, ಕಡಪ, ಆಂಧ್ರಪ್ರದೇಶ.

2) ವಿಭಾಗೀಯ ವ್ಯವಸ್ಥಾಪಕರು, ಬಜಾಜ್ ಅಲಯನ್ಸ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಸೀತಾರಾಮ ಕಾಂಪ್ಲೆಕ್ಸ್, ಡಬಲ್ ರೋಡ್, ಬಳ್ಳಾರಿ.

**ಪ್ರಕಟಣೆ**

ಶ್ರೀಮತಿ ಕಿರಣ್ಮಯಿ, ಶ್ರೀಮತಿ ಈಶ್ವರಮ್ಮ ಮತ್ತು ಶ್ರೀ ಕೆ.ಓಬಳ ರೆಡ್ಡಿ ಇವರು ತಾವು ಮೃತ ಮೋಹನ್ ರೆಡ್ಡಿಯ ಹೆಂಡತಿ, ತಂದೆ ಮತ್ತು ತಾಯಿಗಳೆಂದು ಹಾಗೂ ಅವಲಂಬಿತರೆಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೋಹನ್ ರೆಡ್ಡಿ 1ನೇ ಪ್ರತಿವಾದಿಯ ಲಾರಿ ನಂ.ಎಪಿ-04/ಎಕ್ಸ್-2778 ರಲ್ಲಿ ಚಾಲಕನಾಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ:30.09.2008ರಂದು 1ನೇ ಪ್ರತಿವಾದಿಯ ಆದೇಶದ ಮೇರೆ ಬಳ್ಳಾರಿ ಹತ್ತಿರವಿರುವ ಮೈನ್ಸ್‌ನಲ್ಲಿ ಮೈನ್ಸ್ ಲೋಡ್ ಮಾಡಿಕೊಂಡು ಬಳ್ಳಾರಿ-ಬೆಂಗಳೂರು ರಸ್ತೆ ತುಂಗಭದ್ರ ಹೆಚ್.ಎಲ್.ಸಿ. ಕಾಲುವೆಯಲ್ಲಿ ಮಧ್ಯಾಹ್ನ 3-00 ಗಂಟೆ ಸಮಯದಲ್ಲಿ ಸ್ನಾನ ಮಾಡಲು ಹೋದಾಗ ಆಕಸ್ಮಿಕವಾಗಿ ಕಾಲು ಜಾರಿ ಬಿದ್ದು ನೀರಿನಲ್ಲಿ ಕೊಚ್ಚಿಕೊಂಡು ಹೋಗಿರುತ್ತಾನೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ

ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.1279

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ–1, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ:485/08/ಎಫ್:1271, ದಿನಾಂಕ:10ನೇ ನವೆಂಬರ್, 2008**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಎನ್. ಅನಸೂಯ ಗಂಡ: ಲೇಟ್ ಎನ್. ಚಂದ್ರ, ವಯಸ್ಸು:40 ವರ್ಷ. ವೃತ್ತಿ ಗೃಹಿಣಿ. (ಮೃತನ ಹೆಂಡತಿ)<br>2) ಮಾಸ್ಟರ್ ರಾಕೇಶ್ ತಂದೆ: ಲೇಟ್: ಎನ್. ಚಂದ್ರ, ವಯಸ್ಸು 09 ವರ್ಷ. ವೃತ್ತಿ–<br>ವಾಸ: ಇಬ್ಬರು ಮೋರೆಗಲ್ಲಿ, ಕಾಲ್‌ಬಜಾರ್, ಬಳ್ಳಾರಿ. | **ವಿರುದ್ಧ** | 1) ಶ್ರೀ ಶಿವಲಿಂಗೇಶ್ವರರಾವ್, ತಂದೆ: ವೆಂಕಟೇಶ್ವರರಾವ್, ಲಾರಿ ಮಾಲೀಕರು, ಸಂಖ್ಯೆ: ಕೆಎ–34:7797,<br>ವಾಸ: ಸ್ತ್ರೀಸೇವ ನಿಕೇತನ, ಕ್ಲಬ್‌ರೋಡ್, ಬಳ್ಳಾರಿ.<br>2) ದಿ ಬ್ರಾಂಚ್ ಮ್ಯಾನೇಜರ್, ಮೆ: ಬಜಾಜ್ ಅಲಿಯಾನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

ಸದರಿ ಅರ್ಜಿದಾರರಾದ ಶ್ರೀಮತಿ ಎನ್. ಅನಸೂಯ ಗಂ: ಲೇಟ್ ಎನ್. ಚಂದ್ರ ಹಾಗೂ ಮಾಸ್ಟರ್, ರಾಕೇಶ್ ತಂದೆ: ಲೇಟ್. ಎನ್. ಚಂದ್ರ ಇವರು ತಾವು ಮೃತ ಚಂದ್ರನ ಹೆಂಡತಿ ಹಾಗೂ ಮಗನಾಗಬೇಕೆಂದು ಹಾಗೂ ವಾರಸುದಾರರೆಂದು ಮತ್ತು ಅವಲಂಬಿತರೆಂದು ತಿಳಿಸುತ್ತಾ, ಮೃತ ಎನ್. ಚಂದ್ರ 1ನೇ ಪ್ರತಿವಾದಿ ಲಾರಿ ವಾಹನ ಸಂಖ್ಯೆ: ಕೆಎ–34:7797ರಲ್ಲಿ ಚಾಲಕನಾಗಿ ಕೆಲಸ ಮಾಡುತ್ತಿದ್ದನೆಂದು ದಿನಾಂಕ:31.05.2008 ರಂದು 1ನೇ ಪ್ರತಿವಾದಿಗಳ ನಿರ್ದೇಶನದ ಮೇರೆಗೆ ಬಳ್ಳಾರಿಯಿಂದ ಸಂಡೂರ್‌ಗೆ ಮೈನ್ಸ್ ಲೋಡ್‌ಗಾಗಿ ಹೋಗುತ್ತಿದ್ದಾಗ ಮುಂದಿನ ಲಾರಿ ಚಾಲಕನು ಸಡನ್ ಆಗಿ ಬ್ರೇಕ್ ಹಾಕಿದ್ದರಿಂದ ಎನ್. ಚಂದ್ರ ರವರಿಗೆ ತನ್ನ ವಾಹನ ಹಿಡಿತಕ್ಕೆ ಬಾರದೆ ಡಿಕ್ಕಿ ಹೊಡೆದು ಅಪಘಾತ ಸಂಭವಿಸಿತ್ತೆಂದು, ಕೂಡಲೇ ವಿಮ್ಸ್ ಆಸ್ಪತ್ರೆ, ಬಳ್ಳಾರಿ ಇಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಫಲಕಾರಿಯಾಗದೆ ಮೃತಪಟ್ಟಿರುತ್ತಾನೆಂದು ತಿಳಿಸುತ್ತಾ, ಮೃತನ ಮರಣದ ಪರಿಹಾರವಾಗಿ ನ್ಯಾಯಾಲಯದಲ್ಲಿ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರಿದ್ದಲ್ಲಿ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಸಂಬಂಧವಾಗಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಕಿದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.1280

**IN THE COURT OF COMMISSIONER FOR WORKMEN'S COMPENSATION BIDAR**

**No. LOB/WCA/Cr-F:41/2008**

| **Applicants:** | | **Respondents:** |
|---|---|---|
| 1) Farida Begum W/o Late. Shai Mulla @ Mulla Madar Sab, Age:30 yrs. Occup Household, R/o Village Markunda, Taluka District: Bidar & 4 Others. | **V/s** | 1) K.R. Ganesh Prop. A.B. Garrien Gosha Mahal Hyderabad.<br>2) National Insurance Co.Ltd., Gosha Mahal, Hyderabad. |

**PROCLAIMATION**

Sri/Smt: Fareeda Begum W/o. Shai Mulla & Mulla Madar Sab R/o Markunda Tq: & Dist. Bidar. have/has filed application in this Court claiming compensation stating that Late: Shai Mulla Madar Sab. was working as Driver Under the Respondent No I he met with an accident arising out of and during the course of employment as a result he died on : 17.11.2006.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

**COMMISSIONER FOR WORKMEN'S COMPENSATION, BIDAR.**

PR-1317

**IN THE COURT OF COMMISSIONER FOR WORKMEN'S COMPENSATION BIDAR**

**No. LOB/WCA/Cr-F:44/2008**

| **Applicants:** | | **Respondents:** |
|---|---|---|
| 1) Basamma W/o Late Dayanand Hinde Age: 39 yrs, Occup Household, R/o Shahgunj, Main Road, Bidar, and 6 others. | **V/s** | 1) M/s. Asha Lodge Opposite New Bus-stand Bidar by its Proprietor Shanth Kumar, Masudi Bidar.<br>2) The Manager, Asha Lodge Opp. New Bus-stand By its Manage Shashidhar S/P. Chandarshekhar, Bidar. |

**PROCLAIMATION**

Sri/Smt: Basamma W/o. Late:Dayanand Hinde R/o. H.No.1-1-100 Inside Shah Gunj, Main Road, Bidar. have/has filed application in this Court claiming compensation stating that Late: Dayanand Hinde was working as Welder Under the Respondent No I he met with an accident arising out of and during the course of employment as a result he died on : 17.08.2008.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

**COMMISSIONER FOR WORKMEN'S COMPENSATION, BIDAR.**

PR-1318

**URBAN DEVELOPMENT DEPARTMENT**

**NOTIFICATION**

**No. UDD 19 Nayose 2004, Bangalore, Dated:10th November, 2008**

In the Notification No.E(1)21/2003-04/PSC, Dated:17.05.2004, the Karnataka Public Service Commission has selected 15 candidates for appoinment to the post of Assistant Director of Town Planning in the Department of Town Planning subject to the result of Writ Petition No. 232/1999 pending before the Hon'ble Supreme Court of India.

Accordingly, in the Notification No. UDD 82 Na Yo Se 2004, Dated:16.09.2004 appointment was given to 15 candidates, keeping vacant the post at Sl.No. 6 as per the Interim Order of the Hon'ble High Court in Writ Petition No.1526/2004 filed by Shri Girish Karnad.

The Karnataka Public Service Commission vide its letter No.R(1) 4486/08-09, Dated:16.09.2008 has stated that since the Writ Petition No.1526/2004 is dismissed by the Hon'ble High Court, it has selected Shri H.V. Sannappaiah in Sl.No.6 revising the final selection list and has requested to appoint Sri H.V. Sannappaiah following due procedure.

The Police Verification and Medical Reports in respect of Shri H.V. Sannappaiah have been received. As per the Police Verification Report there are no adverse reports against him. The Medical Report confirms that he is physically fit enough to hold the post for which he is selected.

Government is therefore pleased to appoint Shri H.V. Sannappaiah as Assistant Director of Town Planning (Group-A) in the Department of Town Planning, in the Pay Scale of Rs.14050-350-14400-400-16800-450-19500-525-22650-600-25050 under the Karnataka Civil Services (General Recruitment) Rules 1977 read with the Karnataka Civil Services (Probation) Rules 1977. He will be on probation for a period of two years.

Shri H.V. Sannappaiah shall report before the Director of Town Planning, Bangalore within 15 days from the receipt of this order failing which his appointment shall be cancelled. The Director of Town Planning shall take his duty report and shall organize a training for him.

Shri H.V. Sannappaiah shall pass the prescribed departmental examination and Kannada Language Examination within the period of his probation.

This appointment is subject to the result of the Writ Petition No.232/1999 pending before the Hon'ble Supreme Court of India.

By Order and in the name of the Governor of Karnataka,

PR-1326

**S.N. KRISHNAKUMAR**

Under Secretary to Government,

Urban Development Department.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Clarification No. CLR.CR.151/07-08, Dated:18th September, 2008**

**Sub:** KVAT Act, 2003-Clarification under Section 59(4) regarding the rate of tax applicable on various types of 'insulated copper and aluminum strip/wires, winding wires and kapton polyimide film covered heat bonded copper strips/wires'.

**Ref:** 1) Application Dated:17.08.2007 of M/s Pearl Insulations Pvt. Ltd., Plot No.505 to 507, IV Phase, Peenya Industrial Area, Bangalore-560 058.

2) Proceedings of the Commissioner of Commercial Taxes issued in Clarification No. CLR/CR-151/07-08, Dated:27.11.2007.

3) Applicant's letter Dated:15.12.2007.

4) Proceedings of the Commissioner of Commercial Taxes issued in Clarification No.CLR/CR-151/07-08, Dated:21.06.2008.

5) Applicant's letter Dated:24.07.2008.

As per this office proceedings issued in clarification No.CLR.CR.151/07-08, Dated:21.06.2008 cited at ref.(4) above, the rates of taxes applicable on the goods mentioned therein was clarified.

2. The dealer company in its letter cited at ref.(5) above has sought clarification regarding rate of tax applicable on some of the products which are classified under Central Excise Tariff heading 8544, notified at Sl.No.177 of Notification No.FD 197 CSL 2005(6), Dated:30.04.2005.

3. On re-examination of the issue, it is noticed that the earlier clarification issued from this office in clarification No.CLR.CR.151/07-08, Dated:21.06.2008 is in order and required no modification and is according to law and therefore, the request is rejected.

**B.A. HARISH GOWDA**

PR-1124

Commissioner of Commercial Taxes,

(Karnataka), Bangalore.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀ ಲಕ್ಷ್ಮಣ್ ಕೀರ್ತಿ ಬಿನ್ ಲೇಟ್. ಸಕಲಯ್ಯ** ರವರು **ಹಾಸನ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಸಕಲೇಶಪುರ ತಾಲ್ಲೂಕಿನ 38–ಬೆಳಗೋಡು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಹಾಸನ ಜಿಲ್ಲೆ** ರವರ ಪತ್ರದ ಸಂಖ್ಯೆ: ಚುನಾವಣೆ(2)45/2005–06, ದಿನಾಂಕ:**02.03.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**01.04.2006**.

3) ಜಿಲ್ಲಾಧಿಕಾರಿಗಳು, **ಹಾಸನ** ಜಿಲ್ಲೆ ರವರ ಪತ್ರ ಸಂಖ್ಯೆ:ಚುನಾವಣೆ(2)131/2007–08, ದಿನಾಂಕ:**14.10.2008**.

**ಪ್ರಸ್ತಾವನೆ:**

**ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 38–ಬೆಳಗೋಡು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀ ಲಕ್ಷ್ಮಣ್ ಕೀರ್ತಿ ಬಿನ್ ಲೇಟ್. ಸಕಲಯ್ಯ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಹಾಸನ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**01.04.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/31(1)/ ಟಿಜಡ್‌ಪಿ/2008, ಬೆಂಗಳೂರು, ದಿನಾಂಕ:24ನೇ ಅಕ್ಟೋಬರ್, 2008**

ಮೇಲೆ ವಿವರಿಸಿರುವಂತೆ **ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 38–ಬೆಳಗೋಡು ಜಿಲ್ಲಾ** ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀ ಲಕ್ಷ್ಮಣ್ ಕೀರ್ತಿ ಬಿನ್ ಲೇಟ್. ಸಕಲಯ್ಯ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**
ಆಯುಕ್ತರು,
ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀ ಹೆಚ್.ಎಸ್. ಸಂಪತ್ ಬಿನ್ ಲೇ:ಹೆಚ್.ಡಿ. ಶಾಂತಪ್ಪ** ರವರು **ಹಾಸನ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಸಕಲೇಶಪುರ ತಾಲ್ಲೂಕಿನ 39–ಹಾನುಬಾಳು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಹಾಸನ ಜಿಲ್ಲೆ** ರವರ ಪತ್ರದ ಸಂಖ್ಯೆ: ಚುನಾವಣೆ(2)45/2005–06, ದಿನಾಂಕ:**02.03.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**01.04.2006**.

3) ಜಿಲ್ಲಾಧಿಕಾರಿಗಳು, **ಹಾಸನ** ಜಿಲ್ಲೆ ರವರ ಪತ್ರ ಸಂಖ್ಯೆ:ಚುನಾವಣೆ(2)131/2007–08, ದಿನಾಂಕ:**14.10.2008**.

**ಪ್ರಸ್ತಾವನೆ:**

**ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 39–ಹಾನುಬಾಳು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀ ಹೆಚ್.ಎಸ್. ಸಂಪತ್ ಬಿನ್ ಲೇ:ಹೆಚ್.ಡಿ. ಶಾಂತಪ್ಪ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಹಾಸನ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**01.04.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/31(2)/ ಟಿಜಡ್‌ಪಿ/2008, ಬೆಂಗಳೂರು, ದಿನಾಂಕ:24ನೇ ಅಕ್ಟೋಬರ್, 2008**

ಮೇಲೆ ವಿವರಿಸಿರುವಂತೆ **ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 39–ಹಾನುಬಾಳು ಜಿಲ್ಲಾ** ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀ ಹೆಚ್.ಎಸ್. ಸಂಪತ್ ಬಿನ್ ಲೇ:ಹೆಚ್.ಡಿ. ಶಾಂತಪ್ಪ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಆಯುಕ್ತರು,

ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀಮತಿ ಟಿ.ಡಿ.ಗೀತಾ ಹೊವಣ್ಣ ಕೋಂ ಕೆ.ಸಿ.ಹೂವಯ್ಯ** ರವರು **ಹಾಸನ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಸಕಲೇಶಪುರ ತಾಲ್ಲೂಕಿನ 40–ಯಸಳೂರು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಹಾಸನ ಜಿಲ್ಲೆ** ರವರ ಪತ್ರದ ಸಂಖ್ಯೆ: ಚುನಾವಣೆ(2)45/2005–06, ದಿನಾಂಕ:**02.03.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**01.04.2006**.

3) ಜಿಲ್ಲಾಧಿಕಾರಿಗಳು, **ಹಾಸನ** ಜಿಲ್ಲೆ ರವರ ಪತ್ರ ಸಂಖ್ಯೆ:ಚುನಾವಣೆ(2)131/2007–08, ದಿನಾಂಕ:**14.10.2008**.

**ಪ್ರಸ್ತಾವನೆ:**

**ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 40–ಯಸಳೂರು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಟಿ.ಡಿ.ಗೀತಾ ಹೊವಣ್ಣ ಕೋಂ ಕೆ.ಸಿ.ಹೂವಯ್ಯ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಹಾಸನ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**01.04.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/31(3)/ ಟಿಜಡ್‌ಪಿ/2008, ಬೆಂಗಳೂರು, ದಿನಾಂಕ:24ನೇ ಅಕ್ಟೋಬರ್, 2008**

ಮೇಲೆ ವಿವರಿಸಿರುವಂತೆ **ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 40–ಯಸಳೂರು ಜಿಲ್ಲಾ** ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಟಿ.ಡಿ.ಗೀತಾ ಹೊವಣ್ಣ ಕೋಂ ಕೆ.ಸಿ.ಹೂವಯ್ಯ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**
ಆಯುಕ್ತರು,
ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀಮತಿ ವೈ.ಎಸ್. ಗೌರಮ್ಮ ಕೋಂ ವೈ.ಎನ್. ಶಿವಶಂಕರ್** ರವರು **ಹಾಸನ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಸಕಲೇಶಪುರ ತಾಲ್ಲೂಕಿನ 40–ಯಸಳೂರು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಹಾಸನ ಜಿಲ್ಲೆ** ರವರ ಪತ್ರದ ಸಂಖ್ಯೆ: ಚುನಾವಣೆ(2)45/2005–06, ದಿನಾಂಕ:**02.03.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**01.04.2006**.

3) ಜಿಲ್ಲಾಧಿಕಾರಿಗಳು, **ಹಾಸನ** ಜಿಲ್ಲೆ ರವರ ಪತ್ರ ಸಂಖ್ಯೆ:ಚುನಾವಣೆ(2)131/2007–08, ದಿನಾಂಕ:**14.10.2008**.

**ಪ್ರಸ್ತಾವನೆ:**

**ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 40–ಯಸಳೂರು ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ವೈ.ಎಸ್. ಗೌರಮ್ಮ ಕೋಂ ವೈ.ಎನ್. ಶಿವಶಂಕರ್** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಹಾಸನ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**01.04.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/31(4)/ ಟಿಜಡ್‌ಪಿ/2008, ಬೆಂಗಳೂರು, ದಿನಾಂಕ:24ನೇ ಅಕ್ಟೋಬರ್, 2008**

ಮೇಲೆ ವಿವರಿಸಿರುವಂತೆ **ಹಾಸನ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಸಕಲೇಶಪುರ ತಾಲ್ಲೂಕಿನ 40–ಯಸಳೂರು ಜಿಲ್ಲಾ** ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ವೈ.ಎಸ್. ಗೌರಮ್ಮ ಕೋಂ ವೈ.ಎನ್. ಶಿವಶಂಕರ್** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಪಿ.ಆರ್.1224

ಆಯುಕ್ತರು,

ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** ರಾಮನಗರ (ಹಿಂದಿನ ಬೆಂಗಳೂರು ಗ್ರಾಮಾಂತರ) ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಮುದಗೆರೆ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿದ್ದ ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ರವರ ಚುನಾವಣಾ ವೆಚ್ಚದ ವಿವರವನ್ನು ಸಲ್ಲಿಸದಿದ್ದ ಕಾರಣ ಇವರನ್ನು ಅನರ್ಹಗೊಳಿಸಿದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಆದೇಶ ಸಂಖ್ಯೆ:ರಾಚುಆ.125(12) ಟಿಜೆಡ್‌ಪಿ 2007, ಬೆಂಗಳೂರು, ದಿನಾಂಕ:11ನೇ ನವೆಂಬರ್, 2008**

ರಾಮನಗರ (ಹಿಂದಿನ ಬೆಂಗಳೂರು ಗ್ರಾಮಾಂತರ) ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಮುದಗೆರೆ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ

ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು ಹಿಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳು ವರದಿ ಮಾಡಿದ್ದರು.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ (5)ರನ್ವಯ ದಿನಾಂಕ:19.05.2006ರಂದು ನೋಟೀಸನ್ನು ಸದರಿ ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿದ್ದರು. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರಲಿಲ್ಲ. ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿದ್ದರು.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ.ಹೆಳವೇಗೌಡ ಇವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುವುದರಿಂದ ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಆದೇಶ ಸಂಖ್ಯೆ: ರಾಚುಆ.125(12) ಟಿಜೆಡ್‌ಪಿ2007 ದಿನಾಂಕ:30.10.2007 ರಂತೆ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಲಾಗಿತ್ತು.

ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ಇವರು ಈ ಆದೇಶವನ್ನು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 1059/08ನ್ನು ದಾಖಲಿಸಿ ಪ್ರಶ್ನಿಸಿದ್ದರು ಹಾಗೂ ಅರ್ಜಿದಾರರು ಉಚ್ಚ ನ್ಯಾಯಾಲಯದಲ್ಲಿ ದಿನಾಂಕ:18.01.2006ರಂದೇ ಸಂಬಂಧಿಸಿದ ಚುನಾವಣಾಧಿಕಾರಿಯವರಿಗೆ ಲೆಕ್ಕಪತ್ರವನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಈ ಹಿನ್ನಲೆಯಲ್ಲಿ ಉಚ್ಚ ನ್ಯಾಯಾಲಯವು ಅವರ ವಾದವನ್ನು ಮನ್ನಿಸಿ ಚುನಾವಣಾ ಆಯೋಗವು ಅವರನ್ನು ಅನರ್ಹಗೊಳಿಸಿದ ಆದೇಶವನ್ನು ರದ್ದುಪಡಿಸುತ್ತಾ ಅರ್ಜಿದಾರರಿಗೆ ಅವರ ಅಹವಾಲು ಹಾಗೂ ವಿವರಣೆ ಸಲ್ಲಿಸಲು ಅವಕಾಶ ನೀಡಿ ತದನಂತರ ಕಾನೂನು ರೀತ್ಯಾ ಸೂಕ್ತ ಆದೇಶ ಹೊರಡಿಸುವಂತೆ ಆದೇಶಿಸಿದೆ ಹಾಗೂ ರಿಟ್ ಅರ್ಜಿದಾರರಿಗೆ ಚುನಾವಣಾ ಆಯೋಗದ ಮುಂದೆ ದಿನಾಂಕ:03.07.2008ರಂದು ಹಾಜರಾಗುವಂತೆಯೂ ಆದೇಶಿಸಿತ್ತು.

ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ಇವರು ಉಚ್ಚ ನ್ಯಾಯಾಲಯದ ಆದೇಶದನ್ವಯ ದಿನಾಂಕ:03.07.2008ಕ್ಕೆ ಬದಲಾಗಿ ದಿನಾಂಕ:02.07.2008ರಂದೇ ಖುದ್ದು ಹಾಜರಾಗಿ ಸಲ್ಲಿಸಿರುವ ಮನವಿಯಲ್ಲಿ ಅವರ ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಂಬಂಧಿಸಿದ ಚುನಾವಣಾಧಿಕಾರಿಗಳಿಗೆ ದಿನಾಂಕ:27.12.2005ರಂದು ಸಲ್ಲಿಸಿರುವುದಾಗಿ ತಿಳಿಸುತ್ತಾ, ನ್ಯಾಯಾಲಯದ ಆದೇಶದನ್ವಯ ಮನವಿಯನ್ನು ಪುರಸ್ಕರಿಸಿ ಲೆಕ್ಕಪತ್ರ ಸಲ್ಲಿಸದ ಕಾರಣದಿಂದಾಗಿ ಅನರ್ಹಗೊಳಿಸಿರುವ ಆದೇಶವನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಜಿಲ್ಲಾಧಿಕಾರಿಯವರ ವರದಿಯನ್ನು ಪಡೆಯಲಾಗಿದ್ದು, ಜಿಲ್ಲಾಧಿಕಾರಿಯವರು ಅವರ ಪತ್ರದಲ್ಲಿ ಚನ್ನಪಟ್ಟಣ ತಹಶೀಲ್ದಾರ್‌ರವರ ವರದಿಯ ರೀತ್ಯಾ ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ರವರು ಚುನಾವಣಾಧಿಕಾರಿಯವರಿಗೆ ಸಕಾಲದಲ್ಲಿ ಲೆಕ್ಕಪತ್ರ ಸಲ್ಲಿಸಿರುವುದಾಗಿ ವರದಿ ಸಲ್ಲಿಸಿರುತ್ತಾರೆ.

ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ಇವರು ಚುನಾವಣಾ ವೆಚ್ಚದ ವಿವರವನ್ನು ಸಂಬಂಧಿಸಿದ ಚುನಾವಣಾಧಿಕಾರಿಯವರಿಗೆ ಸಲ್ಲಿಸಿ, ಅವರಿಂದ ಪಡೆದು ಸಲ್ಲಿಸಿರುವ ಸ್ವೀಕೃತಿಯನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ನಿಗದಿತ ಅವಧಿಯಲ್ಲಿ ಚುನಾವಣಾ ವೆಚ್ಚದ ವಿವರಗಳನ್ನು ಸಲ್ಲಿಸಿರುವುದರಿಂದ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ ಅರ್ಜಿದಾರರಿಗೆ ಮತ್ತೊಂದು ಅವಕಾಶ ನೀಡಿ ಅವರ ವಿವರಣೆಯನ್ನು ಕಾನೂನು ರೀತ್ಯ ಪರಿಶೀಲಿಸಿ ಅಂಗೀಕರಿಸಲಾಗಿದೆ.

ಮೇಲೆ ವಿವರಿಸಿದ ಕಾರಣಗಳಿಂದ ಶ್ರೀ ಎಂ.ಹೆಚ್. ಜಯರಾಮು ಬಿನ್ ಎಂ. ಹೆಳವೇಗೌಡ ಇವರನ್ನು ಅನರ್ಹಗೊಳಿಸುವ ಪ್ರಶ್ನೆ ಉದ್ಭವಿಸುವುದಿಲ್ಲ.

**ಮ.ರಾ. ಹೆಗಡೆ**

ಪಿ.ಆರ್.1262

ಆಯುಕ್ತರು,

ರಾಜ್ಯ ಚುನಾವಣಾ ಆಯೋಗ.

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2007ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆ ಕನ್ನಡಭಾಷಾ ಪರೀಕ್ಷೆಯಲ್ಲಿ ಗುಲ್ಬರ್ಗಾ ಜಿಲ್ಲೆ ಪರೀಕ್ಷಾ ಕೇಂದ್ರದಲ್ಲಿ ದುರಾಚಾರ ಪ್ರಕರಣದ ಬಗ್ಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:**

1) ಆಡಳಿತ ಸಂಖ್ಯೆ:2425/2007–08/ಪಿಎಸ್‌ಸಿ, ದಿನಾಂಕ:11.03.2008.

2) ವಿಚಾರಣಾಧಿಕಾರಿಯವರ ವರದಿ ದಿನಾಂಕ:29.04.2008.

3) ಆಯೋಗದ ಆದೇಶ ದಿನಾಂಕ:29.07.2008.

**ಪ್ರಸ್ತಾವನೆ:**

ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:26.11.2007ರಂದು ನಡೆಸಲಾದ 2007ನೇ ದ್ವಿತೀಯ ಅಧಿವೇಶನ ಇಲಾಖಾ ಪರೀಕ್ಷೆಯ ಕನ್ನಡ ಭಾಷಾ ವಿಷಯದ ಅಭ್ಯರ್ಥಿಯಾದ ಶ್ರೀ ನರಸಿಂಹಲು, ನೋಂದಣಿ ಸಂಖ್ಯೆ:69268 ಇವರಿಗೆ ಪರೀಕ್ಷೆ ಬರೆಯಲು ಪ್ರವೇಶಪತ್ರ ನೀಡಲಾಗಿತ್ತು. ಆದರೆ ಇವರ ಬದಲಿಗೆ ಅದೇ ಇಲಾಖೆಯ ಶ್ರೀ ಜಿ.ವೆಂಕಟೇಶ, ಪೊಲೀಸ್ ಕಾನ್‌ಸ್ಟೇಬಲ್, ಪರೀಕ್ಷೆ ಬರೆಯುತ್ತಿದ್ದುದ್ದನ್ನು ಪತ್ತೆ ಹಚ್ಚಿ ಪರೀಕ್ಷಾ ಕೇಂದ್ರದ ಮೇಲ್ವಿಚಾರಕರು ಮಾಡಿರುವ ದೂರಿನ ಆರೋಪದ ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:11.03.2008ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ನೇಮಿಸಲಾಗಿತ್ತು. ಕ್ರಮಸಂಖ್ಯೆ:(2)ರಲ್ಲಿ ಓದಲಾದ ವರದಿಯಲ್ಲಿ ವಿಚಾರಣಾಧಿಕಾರಿಗಳು ಅಭ್ಯರ್ಥಿಗಳ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ. ಕ್ರಮಸಂಖ್ಯೆ (3)ರಲ್ಲಿ ಓದಲಾದ ಆಯೋಗದ ಆದೇಶ ದಿನಾಂಕ:29.07.2008ರ ಅನ್ವಯ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)1151/2008–09/ ಪಿಎಸ್‌ಸಿ, ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್, 2008**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿ ನಿಯಮ 4 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಅಧಿಕೃತ ಜ್ಞಾಪನಪತ್ರ ಸಂಖ್ಯೆ: ಆಡಳಿತ.398/93–94 ಪಿಎಸ್‌ಸಿ ದಿನಾಂಕ:14.07.1993 ಅಧಿಸೂಚನೆಯಂತೆ ಸದರಿ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಯಾದ ಶ್ರೀ ನರಸಿಂಹಲು, (ನೋಂದಣಿ ಸಂಖ್ಯೆ:69268) ಪೊಲೀಸ್ ಕಾನ್‌ಸ್ಟೇಬಲ್ ನಂ.754, ಡಿಸಿಓವೈ, 6ನೇ ಬೆಟಾಲಿಯನ್, ಕೆಎಸ್‌ಆರ್‌ಪಿ, ಗುಲ್ಬರ್ಗಾ, ಇವರ ವಿರುದ್ಧ ಆರೋಪ ಸಾಬೀತಾಗಿರುವುದರಿಂದ ಇವರನ್ನು ಆಯೋಗದಿಂದ ನಡೆಸಲಾಗುವ ಇಲಾಖಾ ಪರೀಕ್ಷೆಗಳಿಗೆ ಖಾಯಂ ಹಾಜರಾಗದಂತೆ ದಂಡನೆಯನ್ನು ವಿಧಿಸಿ ಆದೇಶ ಹೊರಡಿಸಿದೆ.

ಆಯೋಗದ ಆದೇಶದ ಮೇರೆಗೆ,

**ವಿ.ಬಿ. ಪಾಟೀಲ್**

ಪಿ.ಆರ್.1133

ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕ ಸೇವಾ ಆಯೋಗ.

## ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ನಡಾವಳಿಗಳು

**ವಿಷಯ:** ಶ್ರೀಮತಿ ಎಸ್.ಬಿ. ಪ್ರಫುಲ್ಲ, ಕಿರಿಯ ತರಬೇತಿ ಅಧಿಕಾರಿ, ಕೈಗಾರಿಕಾ ತರಬೇತಿ ಸಂಸ್ಥೆ (ಮಹಿಳಾ), ಹೊಸೂರು ರಸ್ತೆ, ಬೆಂಗಳೂರು–29 ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಂಖ್ಯೆ:ಉತನಿ/ತ/ಆ–1ಎ/ವಿವ–06/06–07, ದಿನಾಂಕ:31.05.2006.

2) ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ(ಮ)/ ಬೆಂಗಳೂರು–29 ಇವರ ಬಿಡುಗಡೆ ಆದೇಶದ ಸಂಖ್ಯೆ:ಸಕೈತಸಂ(ಮ) ಬೆಂ–29/ಆಡಳಿತ/ವೈಕ/ ಪ್ರ.ಎಸ್.ಬಿ./06–07, ದಿನಾಂಕ:22.09.2006.

3) ನಿಮ್ಮ ಮನವಿ ದಿನಾಂಕ: ಇಲ್ಲ (ದಿನಾಂಕ:11.12.2006ರಂದು ಸ್ವೀಕೃತವಾಗಿದೆ)

4) ಈ ಕಛೇರಿಯ ಕಾರಣ ಕೇಳುವ ನೋಟೀಸ್‌ನ ಸಮಸಂಖ್ಯೆ: ದಿನಾಂಕ:05.01.2007 ಮತ್ತು 09.03.2007.

5) ನಿಮ್ಮ ವಿವರಣೆ ದಿನಾಂಕ:18.01.2007 ಮತ್ತು 20.08.2007.

6) ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ, ಪುತ್ತೂರು ಇವರ ದೂರವಾಣಿ ಸಂದೇಶ.

7) ಜಂಟೀ ನಿರ್ದೇಶಕರು (ತರಬೇತಿ ಮತ್ತು ವಿಚಾರಣಾಧಿಕಾರಿಗಳು, ವಿಭಾಗೀಯ ಕಛೇರಿ, ಹುಬ್ಬಳ್ಳಿ ಇವರ ಪತ್ರ ಸಂಖ್ಯೆ:ಹುವಿಕ/ತ/ಆಡಳಿತ/ವೈಕ–ಎಸ್.ಬಿ.ಪಿ/2007–08 ದಿನಾಂಕ:18.09.2007.

8) ಈ ಕಛೇರಿಯ ಅಂತಿಮ ನೋಟೀಸ್ ಸಂಖ್ಯೆ: ಉತಇ/ ತ/ಆ–1 /ವಿವ–113 /06–07 (ಭಾಗ–2) ದಿನಾಂಕ:17.11.2007.

ಶ್ರೀಮತಿ ಎಸ್.ಬಿ ಪ್ರಫುಲ್ಲ, ಕಿರಿಯ ತರಬೇತಿ ಅಧಿಕಾರಿ ಇವರು ಕೈಗಾರಿಕಾ ತರಬೇತಿ ಸಂಸ್ಥೆ(ಮಹಿಳಾ), ಹೊಸೂರು ರಸ್ತೆ, ಬೆಂಗಳೂರು–29 ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಉಲ್ಲೇಖ–1ರಲ್ಲಿನ ಈ ಕಛೇರಿಯ ಆದೇಶದಲ್ಲಿ ಇವರನ್ನು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕೈಗಾರಿಕಾ ತರಬೇತಿ ಸಂಸ್ಥೆ, ಪುತ್ತೂರಿಗೆ ವರ್ಗಾವಣೆ ಮಾಡಲಾಗಿತ್ತು. ಇದರ ಆಧಾರದ ಮೇಲೆ ಉಲ್ಲೇಖ–2 ರಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆ (ಮಹಿಳಾ), ಹೊಸೂರು ರಸ್ತೆ, ಬೆಂಗಳೂರು–29ರ ಪ್ರಾಚಾರ್ಯರು ದಿನಾಂಕ:03.06.2006ರ ಪೂರ್ವಾಹ್ನ ಪದಮುಕ್ತಗೊಳಿಸಿ, ಕೈಗಾರಿಕಾ ತರಬೇತಿ ಸಂಸ್ಥೆ, ಪುತ್ತೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿರುತ್ತಾರೆ. ಆದರೆ ಕೈಗಾರಿಕಾ ತರಬೇತಿ ಸಂಸ್ಥೆ, ಪುತ್ತೂರಿನಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಸತತವಾಗಿ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ಈ ಅನಧಿಕೃತ ಗೈರುಹಾಜರಿಗಾಗಿ ಕಾರಣ ತೋರಿಸುವಂತೆ ಉಲ್ಲೇಖ–4ರಲ್ಲಿ ವಿವರಣೆ ಸಲ್ಲಿಸಲು ತಿಳಿಸಲಾಗಿ ನೀಡಿರುವ ವಿವರಣೆಯು ಅಸಂಬದ್ಧ ಹಾಗೂ ಸರ್ಕಾರಿ ನೌಕರರಿಗೆ ತರವಲ್ಲದ ಉತ್ತರವಾಗಿರುತ್ತದೆ. ಸರ್ಕಾರಿ ನೌಕರರಾಗಿ ಸಾರ್ವಜನಿಕ ಸೇವೆಯನ್ನು ಕಡೆಗಣಿಸಿ, ಸ್ವಹಿತಾಸಕ್ತಿಯನ್ನು ಮಾನ್ಯ ಮಾಡುವಂತೆ ಕೋರಿರುವುದನ್ನು ಗಮನಿಸಿದಾಗ ಸರ್ಕಾರದ ಸವಲತ್ತುಗಳನ್ನು ದುರುಪಯೋಗ ಪಡಿಸಿಕೊಳ್ಳುವ ಪ್ರಯತ್ನವಾಗಿದೆ ಎಂಬುದು ವೇದ್ಯವಾಗುತ್ತದೆ. ಕೈಗಾರಿಕಾ ತರಬೇತಿ ಸಂಸ್ಥೆ, ಪುತ್ತೂರಿನಲ್ಲಿ ತಮ್ಮ ಗೈರುಹಾಜರಿಯಿಂದ ತರಬೇತಿಗೆ ತೊಂದರೆಯಾಗುತ್ತಿರುವುದು ಪ್ರಮುಖವಾದ ಅಂಶವಾಗಿದೆ. ಹಾಗೂ ಸಾರ್ವಜನಿಕ ಹಿತಾಸಕ್ತಿಗೆ ವಿರುದ್ಧವಾಗಿರುತ್ತದೆ. ಸದರಿಯವರ ವರ್ತನೆಯು ಅಶಿಸ್ತಿನಿಂದ ಕೂಡಿದ್ದು, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ಪ್ರಕಾರ ಇಲಾಖಾ ವಿಚಾರಣೆಗೆ ಗುರಿಪಡಿಸಲು ತಕ್ಕದ್ದಾಗಿರುತ್ತದೆ.

ಸದರಿ ನೌಕರರ ಮೇಲೆ ಇಲಾಖಾ ವಿಚಾರಣೆ ನಡೆಸಿ, ಉಲ್ಲೇಖ–7 ರಲ್ಲಿ ಶ್ರೀ ನೂರುದ್ದೀನ್, ಜಂಟಿ ನಿರ್ದೇಶಕರು (ತರಬೇತಿ)/ ವಿಚಾರಣಾಧಿಕಾರಿಗಳು ವಿಭಾಗೀಯ ಕಛೇರಿ ಹುಬ್ಬಳ್ಳಿ ಇವರು ವರದಿಯನ್ನು ಸಲ್ಲಿಸಿರುತ್ತಾರೆ. ವರದಿಯಲ್ಲಿ ಸದರಿ ನೌಕರರು ಯಾವುದೇ ಆರೋಪಗಳಿಗೆ ಉತ್ತರ ನೀಡದಿರುವುದರಿಂದ ಇವರ ವಿರುದ್ಧ ಹೊರಿಸಲಾದ ದೋಷಾರೋಪಗಳು ಸಾಬೀತಾಗಿವೆ ಎಂದು ತಿಳಿಸಿರುತ್ತಾರೆ.

ಶ್ರೀಮತಿ ಪ್ರಫುಲ್ಲ, ಕಿರಿಯ ತರಬೇತಿ ಅಧಿಕಾರಿ, ಇವರು ದಿನಾಂಕ:03.06.2006 ರಿಂದ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ, ಇವರ ಗೈರುಹಾಜರಿಯ ಅವಧಿ 4 ತಿಂಗಳು ಮೀರಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ–108ರ ಅನ್ವಯ ಸರ್ಕಾರಿ ನೌಕರನು ನಿಗದಿಪಡಿಸಿರುವ ಅವಧಿಗೂ ಹೆಚ್ಚಿಗೆ ಅನಧಿಕೃತವಾಗಿ ಗೈರುಹಾಜರಾಗಿರುವ ನೌಕರನನ್ನು ಸೇವೆಯಿಂದ ವಜಾ ಮಾಡಬಹುದಾಗಿದೆ.

ಉಲ್ಲೇಖ (8)ರ ನೋಟೀಸಿನಲ್ಲಿ ಸದರಿ ನೌಕರರಿಗೆ ಅಂತಿಮ ಅವಕಾಶ ನೀಡಲಾಗಿದ್ದು ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಶ್ರೀಮತಿ ಪ್ರಫುಲ್ಲ, ಕಿರಿಯ ತರಬೇತಿ ಅಧಿಕಾರಿ, ಕೈಗಾರಿಕಾ ತರಬೇತಿ ಸಂಸ್ಥೆ (ಮ), ಹೊಸೂರು ರಸ್ತೆ, ಬೆಂಗಳೂರು–29 ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಂತೆ ಶಿಸ್ತು ಕ್ರಮ ಜರುಗಿಸುವುದು ಅನಿವಾರ್ಯವಾಗಿರುತ್ತದೆ.

**ಆದೇಶ**

**ಸಂಖ್ಯೆ: ಉತಇ/ತರಬೇತಿ/ಆಡಳಿತ–1/ವಿವ–133/06–07(ಭಾಗ–2), ದಿನಾಂಕ:26ನೇ ಸೆಪ್ಟೆಂಬರ್, 2008**

ಪೀಠಿಕೆಯಲ್ಲಿ ಪ್ರಸ್ತಾಪಿತವಾಗಿರುವ ಅಂಶಗಳನ್ನಾಧರಿಸಿ, ಶ್ರೀಮತಿ ಪ್ರಫುಲ್ಲ, ಕಿರಿಯ ತರಬೇತಿ ಅಧಿಕಾರಿ, ಕೈಗಾರಿಕಾ ತರಬೇತಿ ಸಂಸ್ಥೆ (ಮ), ಹೊಸೂರು ರಸ್ತೆ, ಬೆಂಗಳೂರು–29 ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–14 (ii) ರಲ್ಲಿನ ನಿಯಮಗಳನ್ನು ಅನ್ವಯಿಸಿ, ಪ್ರಸ್ತಾಪಿತ ನಿಯಮಗಳ ಷೆಡ್ಯೂಲ್–ii ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಶಿಸ್ತು ಕ್ರಮ ವಿಧಿಸಲು ನಿರ್ಧರಿಸಲಾಗಿದ್ದು, ಈ ನಿಯಮಗಳ ನಿಯಮ–8(vii) ರಂತೆ ದಂಡ ವಿಧಿಸಲಾಗಿದೆ. ಅದರಂತೆ, ಶ್ರೀಮತಿ ಪ್ರಫುಲ್ಲ ಕಿರಿಯ ತರಬೇತಿ ಅಧಿಕಾರಿ, ಕೈಗಾರಿಕಾ ತರಬೇತಿ ಸಂಸ್ಥೆ(ಮ), ಹೊಸೂರು ರಸ್ತೆ, ಬೆಂಗಳೂರು–29 ಇವರನ್ನು ಸುದೀರ್ಘ ಅನಧಿಕೃತ ಗೈರುಹಾಜರಿಗಾಗಿ ದಿನಾಂಕ:03.06.2006 ರಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಜಂಟಿ ನಿರ್ದೇಶಕರು ತರಬೇತಿ (ಆಡಳಿತ),
ಆಯುಕ್ತರ ಪರವಾಗಿ,
ಉದ್ಯೋಗ ಮತ್ತು ತರಬೇತಿ.

ಪಿ.ಆರ್.1134

**ಕರ್ನಾಟಕ ಲೋಕಸೇವಾ ಆಯೋಗ**

**ವಿಷಯ:** 2007ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಲ್ಲಿ ಶ್ರೀ ಸಂತೋಷ್‌ಕುಮಾರ್ ನೋಂದಣಿ ಸಂಖ್ಯೆ:70095 ಎಸಗಿದ ದುರಾಚಾರ ಪ್ರಕರಣದ ಬಗ್ಗೆ ದಂಡನೆ ವಿಧಿಸುವ ಆದೇಶ.

**ಓದಲಾಗಿದೆ:**

1) ಶ್ರೀ ಸಂತೋಷ್ ಕುಮಾರ್, ನೋಂದಣಿ ಸಂಖ್ಯೆ:70095 ಗುಲ್ಬರ್ಗಾ ಕೇಂದ್ರ ಅರ್ಜಿ ಸಲ್ಲಿಸಿದ ದಿನಾಂಕ:30.08.2008.
2) ನೋಟೀಸ್ ಸಂಖ್ಯೆ:ಆರ್‌ಹೆಚ್‌ಎಸ್.320/2007–08 ಪಿಎಸ್‌ಸಿ, ದಿನಾಂಕ:20.02.2008.
3) ಶ್ರೀಯುತರ ಸಮಜಾಯಿಷಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ಕರ್ನಾಟಕ ಲೋಕ ಸೇವಾ ಆಯೋಗವು ನಡೆಸಿದ 2007ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ದಿನಾಂಕ:25.11.2007 ಪ್ರಿಯದರ್ಶಿನಿ, ಶಿಕ್ಷಕರ ತರಬೇತಿ ಪರೀಕ್ಷಾ ಕೇಂದ್ರದಲ್ಲಿ ಅಕೌಂಟ್ಸ್ ಹೈಯರ್ ಪತ್ರಿಕೆ–1 ಪರೀಕ್ಷೆ ಬರೆಯುವಾಗ ಮೊಬೈಲ್ ಪೋನ್ ಮೂಲಕ ಮಾತನಾಡುವುದನ್ನು ಸದರಿ ಪರೀಕ್ಷಾ ದಿನದಂದು ವೀಕ್ಷಕರು ತಪಾಸಣೆಗೆ ಬಂದಾಗ ಮೊಬೈಲ್ ಪೋನ್‌ನಲ್ಲಿ ಮಾತನಾಡುತ್ತಾ ಪರೀಕ್ಷಾ ಕಾರ್ಯಕ್ಕೆ ಭಂಗವನ್ನು ಉಂಟು ಮಾಡಿರುವುದರಿಂದ ಉಲ್ಲೇಖ (2)ರಲ್ಲಿ ಕಾರಣ ಕೇಳಲಾಗಿತ್ತು ಆರೋಪಿತರು ಇದುವರೆವಿಗೂ ಯಾವುದೇ ಸಮಜಾಯಿಷಿಯನ್ನು ನೀಡದೆ ಇರುವುದರಿಂದ ಪರೀಕ್ಷಾ ಸಮಯದಲ್ಲಿ ಮೊಬೈಲ್ ಉಪಯೋಗಿಸಿ ಪರೀಕ್ಷಾ ಸೂಚನೆಯನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿರುವ ಕಾರಣ 1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ದಿನಾಂಕ:14.07.1993ರ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ.398/93–94, ಪಿಎಸ್‌ಸಿ ಅನ್ವಯ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)355/2007–08/ ಪಿಎಸ್‌ಸಿ, ಬೆಂಗಳೂರು, ದಿನಾಂಕ:5ನೇ ಜೂನ್, 2008**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮ 11 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಆಡಳಿತ.398/93–94 ಪಿಎಸ್‌ಸಿ ದಿನಾಂಕ:14.07.1993 ಅಧಿಸೂಚನೆಯಂತೆ ಇಲಾಖಾ ಪರೀಕ್ಷೆಗೆ ಅಭ್ಯರ್ಥಿಯಾದ ಶ್ರೀ ಸಂತೋಷ್ ಕುಮಾರ್, ಫಾರ್ಮಸಿಸ್ಟ್, ಪ್ರೈಮರಿ ಹೆಲ್ತ್ ಸೆಂಟರ್, ಇಜೇರಿ, ತಾಲ್ಲೂಕು ಜೇವರ್ಗಿ, ಜಿಲ್ಲೆ ಗುಲ್ಬರ್ಗಾ (ನೋಂದಣಿ ಸಂಖ್ಯೆ:70095) ಇವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿರುವುದರಿಂದ 2007ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,
**ಹೆಚ್.ಬಿ. ಚನ್ನರಾಜು**
ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ)
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್.1180

**ಒಳಾಡಳಿತ ಇಲಾಖೆ**

**ಸೇರ್ಪಡೆ ಆದೇಶ**

**ಸಂಖ್ಯೆ: ಒಇ 192 ಪೊಸಿಪ 2002 (ಭಾಗ–II), ಬೆಂಗಳೂರು, ದಿನಾಂಕ:18ನೇ ನವೆಂಬರ್, 2008**

ಸರ್ಕಾರದ ಅಧಿಸೂಚನೆ–I ಸಂಖ್ಯೆ ಒಇ 192 ಪೊಸಿಪ 2002 ದಿನಾಂಕ:20.12.2007ರಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯ ಡಿವೈ.ಎಸ್.ಪಿ. (ಸಿವಿಲ್) ವೃಂದದಲ್ಲಿ ದಿನಾಂಕ:31.10.1998ರ ವರೆಗಿನ ತಾತ್ಕಾಲಿಕ ಜೇಷ್ಠತಾ ಪಟ್ಟಿ ಅಧಿಸೂಚನೆ– I ನ್ನು ಪ್ರಕಟಿಸಿ ಬಾದಿತರಾದಂತಹ ಅಧಿಕಾರಿಗಳಿಂದ ಸಲಹೆ ಆಕ್ಷೇಪಣೆಗಳನ್ನು (ನಿಗದಿತ ಅವಧಿಯೊಳಗೆ ಸಲ್ಲಿಸಿದ) ಸ್ವೀಕರಿಸಿ, ಪರಿಶೀಲಿಸಿ, ಪರಿಗಣಿಸಿ ಸೇವಾ ಹಿರಿತನವನ್ನು ಅನುಸರಿಸಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:31.05.1991 ರಿಂದ 31.10.1998ರ ಅವಧಿಗೆ ಸಂಬಂಧಿಸಿದಂತೆ ಪ್ರಕಟಿಸಲಾಗಿತ್ತು. ಈ ಪಟ್ಟಿಯ ಬಗ್ಗೆ ಕೆ.ಸಿ.ಎಸ್. (ಆರ್.ಪಿ.ಪಿ.ಪಿ.) ಕಾಯ್ದೆ, 1973ರಡಿ ಪರಿಶೀಲಿಸಿ ದಿನಾಂಕ:20.12.2007ರಂದು ಪ್ರಕಟಿಸಿದ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಬಗ್ಗೆ ಕೆ.ಎ.ಟಿ. ಅರ್ಜಿ ಸಂಖ್ಯೆ:408, 414,415, 502 ಮತ್ತು 1171/08 ರಲ್ಲಿ ನ್ಯಾಯಾಲಯದ ಅಂತಿಮ ತೀರ್ಪಿನಂತೆ ಜೇಷ್ಠತಾ ಪಟ್ಟಿ ಬದಲಾಯಿಸುವ ಷರತ್ತಿಗೊಳಪಡಿಸಿ ಕೆ.ಸಿ.ಎಸ್. (ಆರ್.ಪಿ.ಪಿ.ಪಿ.) ಕಾಯ್ದೆ, 1973ರ ಪ್ರಕಾರ ಡಿವೈ.ಎಸ್.ಪಿ. (ಸಿವಿಲ್ ವೃಂದದ) ರಿಕ್ತ ಸ್ಥಾನಗಳನ್ನು ಆಧರಿಸಿ ಪರಿಗಣಿತ ದಿನಾಂಕ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್.1310

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52 ರವರ ನಡವಳಿಗಳು**

**ವಿಷಯ:** ಶ್ರೀ ಎಂ.ಐ. ಕವಲೂರ, ವಾಹನ ಚಾಲಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಶಿಸ್ತು ಕ್ರಮ– ದಂಡನೆ ವಿಧಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ರವರ ಆದೇಶ ಸಂಖ್ಯೆ: ಡಿಆರ್/ಜಿಡಿಜಿ/ ಸಿಬ್ಬಂದಿ/ ಇಸಿಸಿ/ ಸಿಆರ್–17/ 2007–08, ದಿನಾಂಕ:21.11.2007.

2) ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ, ಬೆಳಗಾವಿ ಇವರ ಪತ್ರಸಂಖ್ಯೆ: ಜೆಆರ್‌ಎಲ್/ಸಿ/ 284/ಇಸಿಸಿ/ 2007–08, ದಿನಾಂಕ:12.03.2008.

3) ಇದೇ ಸಮ ಸಂಖ್ಯೆಯ ದಿನಾಂಕ:26.07.2008ರ ಈ ಪ್ರಾಧಿಕಾರದ ತಿಳುವಳಿಕೆ ಪತ್ರ.

4) ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ಇವರ ಪತ್ರ ಸಂಖ್ಯೆ: ಡಿಆರ್/ಜಿಡಿಜಿ/ ಸಿಬ್ಬಂದಿ/ ಇಸಿಸಿ/ ಸಿಆರ್–10/ 2006–07/527, ದಿನಾಂಕ:20.08.2008.

**ಪ್ರಸ್ತಾವನೆ:**

ಶ್ರೀ ಎಂ.ಐ.ಕವಲೂರ, ವಾಹನ ಚಾಲಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇವರ ಕೆಲವೊಂದು ದುರ್ನಡತೆಗಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಮೂಲ ಶಿಸ್ತು ಪ್ರಾಧಿಕಾರವಾಗಿ ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ರವರು ಉಲ್ಲೇಖ (1)ರ ಆದೇಶದನ್ವಯ ಇಲಾಖಾ ವಿಚಾರಣೆ ನಡೆಸಿ, ಇದರ ಸಂಬಂಧ ಪಡೆದ ವಿಚಾರಣಾ ವರದಿಯನ್ನು ಉಲ್ಲೇಖ (3)ರ ಪತ್ರದ ಮೂಲಕ ಇವರಿಗೆ ದಂಡನೆ ವಿಧಿಸುವ ಸಲುವಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಲ್ಪಟ್ಟಿದೆ.

ಆರೋಪಿ ಸರ್ಕಾರಿ ನೌಕರರ ವಿರುದ್ಧ ಶಿಸ್ತು ಪ್ರಾಧಿಕಾರವು ಹೂಡಿದ ಆರೋಪಗಳು ಇಂತಿವೆ:

**ಆರೋಪ–1:**

ಶ್ರೀ ಎಂ.ಐ. ಕವಲೂರ, ವಾಹನಚಾಲಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಇವರು ಕಛೇರಿ ಮುಖ್ಯಸ್ಥರಿಂದ ಮುಂಚಿತವಾಗಿ ರಜೆ ಮಂಜೂರಾತಿ ಪಡೆಯದೇ ದಿನಾಂಕ:16.10.2006 ರಿಂದ 24.09.2007 ರವರೆಗೆ ಸುಮಾರು 90 ದಿನಗಳವರೆಗೆ ವಿವಿಧ ದಿನಾಂಕಗಳಂದು ಕಛೇರಿ ಕೆಲಸಕ್ಕೆ ಗೈರು ಹಾಜರು ಇರುತ್ತಾರೆ. ಅವರ ರಜೆ ಲೆಕ್ಕದಲ್ಲಿ ಯಾವುದೇ ರಜೆ ಬಾಕಿ ಇಲ್ಲವೆಂದು ಉಪನಿಬಂಧಕರ ಕಛೇರಿ ಪತ್ರ ದಿನಾಂಕ:24.08.2007 ರಂದು ತಿಳಿಸಿದಾಗ್ಯೂ ಗೈರು ಹಾಜರು ಇರುವುದು ಸದರಿಯವರ ಕರ್ತವ್ಯ ನಿರ್ಲಕ್ಷತೆಯನ್ನು ತೋರಿಸುತ್ತದೆ ಹಾಗೂ ಉಪನಿಬಂಧಕರ ಆದೇಶ ಕ್ರ/ಡಿಆರ್/ಜಿಡಿಜಿ/ ಸಿಬ್ಬಂದಿ/ಇಸಿಸಿ/ ಸಿಆರ್–10/06–07, ದಿನಾಂಕ:15.05.2007 ರಲ್ಲಿ ಈಗಾಗಲೇ ಶ್ರೀ ಎಂ.ಐ. ಕವಲೂರ ಇವರು ಅನಧಿಕೃತ ಗೈರು ಹಾಜರಾದ ಬಗ್ಗೆ ಅವರ ಮೇಲೆ ಶಿಸ್ತಿನ ಕ್ರಮ ಜರುಗಿಸಿ ದಂಡನೆ ವಿಧಿಸಲಾಗಿದೆ.

**ಆರೋಪ–2:**

ದಿನಾಂಕ:11.06.2007 ರಂದು ಮದ್ಯಪಾನ ಮಾಡಿ ವಾಹನ ಓಡಿಸಿ ಎ.ಪಿ.ಎಂ.ಸಿ. ಗೇಟಿಗೆ ಡಿಕ್ಕಿ ಹೊಡೆದಿದ್ದರ ಕುರಿತು ಉಪನಿಬಂಧಕರ ಕಛೇರಿ, ಗದಗ ಇವರಿಂದ ನೋಟೀಸ್ ಕ್ರ/ಡಿಆರ್/ಜಿಡಿಜಿ/ಆಡಳಿತ/ ನೋ೦/07–08, ದಿನಾಂಕ:11.06.2007ರಂದು ನೀಡಿದ್ದು, ಸದರಿ ನೋಟೀಸಿಗೆ ಸಮಂಜಸ ಹೇಳಿಕೆ ಸಲ್ಲಿಸಿರುವುದಿಲ್ಲ ಹಾಗೂ ಈ ಬಗ್ಗೆ ಮಾನ್ಯ ಸಹಕಾರ ಸಚಿವರಿಂದ ಹಿಂಬರಹದ ಮೂಲಕ ಬಂದ ಪತ್ರವನ್ನು ಲಗತ್ತಿಸಿ ಸಹಕಾರ ಸಂಘಗಳ ನಿಬಂಧಕರ ಪತ್ರಾಂಕಿತ ಸಹಾಯಕರು, ಕೇಂದ್ರ ಕಛೇರಿ, ಬೆಂಗಳೂರು ಇವರು ಕ್ರಮ ಜರುಗಿಸಲು ಸೂಚಿಸಿದ್ದರ ಮೇರೆಗೆ ಈ 2ನೇ ಆರೋಪ.

**ಆರೋಪ–3:**

ದಿನಾಂಕ:02.10.2007 ರಂದು ಬೆಳಿಗ್ಗೆ 9–45ಕ್ಕೆ ಕಛೇರಿಯ ಗೇಟಿನ ಮುಂದೆ ನಿಂತ ಲಾರಿ ಸಂಖ್ಯೆ:ಕೆಎ–25–4414 ಇದಕ್ಕೆ ಡಿಕ್ಕಿ ಹೊಡೆದು ವಾಹನಕ್ಕೆ ಧಕ್ಕೆಯುಂಟು ಮಾಡಿ ಕಛೇರಿಯ ಮುಖ್ಯಸ್ಥರಿಗೆ ತಿಳಿಸದೇ, ಕಛೇರಿಗೂ ಹಾಜರಾಗದೇ ದುರ್ನಡತೆ ಎಸಗಿ ಕರ್ನಾಟಕ ನಾಗರೀಕ ಸೇವಾ ನಡತೆ, ನಿಯಮಗಳು 1966ರ ನಿಯಮ 3(111) ರ ಉಪಬಂಧವನ್ನು ಉಲ್ಲಂಘಿಸಿ ಒಬ್ಬ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದಕ್ಕಾಗಿ ಈ ಆರೋಪ.

ಇಲಾಖಾ ವಿಚಾರಣೆ ನಡೆಸಲು ಶಿಸ್ತು ಪ್ರಾಧಿಕಾರವು ನೇಮಕ ಮಾಡಿದ ವಿಚಾರಣಾ ಪ್ರಾಧಿಕಾರವಾದ ಮಾರಾಟಾಧಿಕಾರಿ–1, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11 ರಡಿ ಗೊತ್ತುಪಡಿಸಿದ ಕಾರ್ಯವಿಧಾನಗಳನ್ನು ಅನುಸರಿಸಿ ನಡೆಸಿದ ವಿಚಾರಣೆಯಲ್ಲಿ ಆರೋಪಿ ಸರ್ಕಾರಿ ನೌಕರರ ವಿರುದ್ಧ ಹೂಡಿದ ಮೇಲ್ಕಂಡ ಮೂರು ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟು ತಮ್ಮ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಅಮೂಲಾಗ್ರವಾಗಿ ಪರಿಶೀಲಿಸಿದ ನಂತರ ವಿಚಾರಣಾ ಪ್ರಾಧಿಕಾರದ ಅಭಿಪ್ರಾಯವು ಸಮಂಜಸವಾಗಿರುವುದಾಗಿ ಈ ಪ್ರಾಧಿಕಾರವು ಸಹಮತಿಸಿದೆ.

